| Sl. No. | Case No. | PR. No. | Date of disposal | Description of the properties |
|---|---|---|---|---|
| 1. | CC.245/05 | 6/06 | 27.04.2006 | Eight Copper Ingots. |
| 2. | CC.246/05 | 7/06 | 27.04.2006 | Nine Copper Ingots. |
| 3. | CC.248/05 | 9/06 | 27.04.2006 | Seven Copper Ingots. |
| 4. | CC.509/04 | 15/06 | 10.05.2006 | 3 Copper pieces measuring one feet length & 1 bundle of copper wire. |
| 5. | CC.398/05 | 26/06 | 15.06.2006 | Twenty Copper Ingots. |
| 6. | CC.399/05 | 27/06 | 15.06.2006 | Five Copper Ingots. |

Given under my hand and seal of this Court, on 5th day of October, 2006.

**JAISHANKAR**
Civil Judge (JD) & JMFC.,
Koratagere.

PR-1519

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಕೋರಮಂಗಲ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಪತ್ರ ದಿನಾಂಕ:ಸನಿ 47/ ನೋಂದಣಿ ರದ್ಧತಿ/ 01/2006-07, ದಿನಾಂಕ:31.08.2006.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ ಎಲ್‌ಕ್ಯೂಡಿ/ 61/ 1982-83, ದಿನಾಂಕ:31.12.1993.

**ಪ್ರಸ್ತಾವನೆ:**

ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಕಛೇರಿಯಲ್ಲಿ ಕೋರಮಂಗಲ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂಖ್ಯೆ: ಡಿಆರ್‌ಬಿ/ ಆರ್/ ನೋಂದಣಿ/ 50/ 1975-76 ದಿನಾಂಕ:03.07.1978 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಕೋರಮಂಗಲ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

### ಆದೇಶ

### ಸಂಖ್ಯೆ:ಡಿಆರ್‌ಬಿ/ ಆರ್/ನೋಂದಣಿ ರದ್ಧತಿ/ 83/ 2006-07, ದಿನಾಂಕ:18ನೇ ಸೆಪ್ಟೆಂಬರ್, 2006

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ ಸಿಎಲ್‌ಎಂ/ 2001, ದಿನಾಂಕ:21.11.2001ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಕೋರಮಂಗಲ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಬಿ/ ಆರ್/ ನೋಂದಣಿ/ 50/ 1975-76 ದಿನಾಂಕ:03.07.1978ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:18.09.2006ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್.1449

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಚಿನುವಂಡನಹಳ್ಳಿ ರೇಷ್ಮೆ ಬೆಳೆಗಾರರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಪತ್ರ ದಿನಾಂಕ:ಸನಿ 47/ ನೋಂದಣಿ ರದ್ಧತಿ/ 02/2006-07, ದಿನಾಂಕ:31.08.2006.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ:ಡಿಆರ್‌ಬಿ/ಆರ್/ ಎಲ್‌ಕ್ಯೂಡಿ/ 95/ 102/ 1996-97.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಛೇರಿಯಲ್ಲಿ ಚಿನುವಂಡನಹಳ್ಳೀ ರೇಷ್ಮೆ ಬೆಳೆಗಾರರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂಖ್ಯೆ: ಎಆರ್‌ಡಿಟಿ/ 934/ 1973-74 ದಿನಾಂಕ:03.06.1974 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಚಿನುವಂಡನಹಳ್ಳಿ ರೇಷ್ಮೆ ಬೆಳೆಗಾರರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

**ಸಂಖ್ಯೆ:ಡಿಆರ್‌ಬಿ/ ಆರ್/ನೋಂದಣಿ ರದ್ಧತಿ/ 84/ 2006-2007, ದಿನಾಂಕ:18ನೇ ಸೆಪ್ಟೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ ಸಿಎಲ್ಎಂ/ 2001, ದಿನಾಂಕ:21.11.2001ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಚಿನುವಂಡನಹಳ್ಳಿ ರೇಷ್ಮೆ ಬೆಳೆಗಾರರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಡಿಆರ್‌ಡಿಬಿ/ 934/ 73-74 ದಿನಾಂಕ:03.07.1974ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:18.09.2006ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.1450 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಡಗು ಜಿಲ್ಲೆ, ಮಡಿಕೇರಿ

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ: (2)/40/2005-06, ದಿನಾಂಕ:7ನೇ ಸೆಪ್ಟೆಂಬರ್, 2006**

**ವಿಷಯ:** ಜಿಲ್ಲಾ ಆಸ್ಪತ್ರೆ ಮಡಿಕೇರಿ, ಸಾರ್ವಜನಿಕ ಆಸ್ಪತ್ರೆ ವೀರಾಜಪೇಟೆ/ ಸಾರ್ವಜನಿಕ ಆಸ್ಪತ್ರೆ ಸೋಮವಾರಪೇಟೆಯಲ್ಲಿ ಖಾಲಿ ಇರುವ ತಜ್ಞ/ ಸಾಮಾನ್ಯ ಕರ್ತವ್ಯ ವೈದ್ಯರ ಹುದ್ದೆಯನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಅಧೀನ ಕಾರ್ಯದರ್ಶಿ ಆರೋಗ್ಯ ಮತ್ತು ಕು.ಕ. ಇಲಾಖೆ ಬೆಂಗಳೂರು, ಇವರ ಪತ್ರ ಸಂಖ್ಯೆ: ಆಕುಕ 627/ ಹೆಚ್‌ಎಸ್‌ಹೆಚ್ 2004 ದಿನಾಂಕ:09.02.2005.

(2) ಸಂಖ್ಯೆ: ಹೆಚ್‌ಎಸ್‌ಡಬ್ಲ್ಯೂ 120/ ಪ್ರಿನ್ಸಿಪಾಲ್ ಸೆಕ್ರೆಟರಿ 2005 ದಿನಾಂಕ:15.07.2005.

(3) ಈ ಕಛೇರಿ ಪತ್ರಿಕಾ ಪ್ರಕಟಣೆ ಸಂಖ್ಯೆ: ಇಎಸ್‌ಟಿ (2) 69/ 06-07 ದಿನಾಂಕ:17.06.2006.

ಉಲ್ಲೇಖ (1), (2)ರ ಆದೇಶ ಪ್ರಕಾರ ಜಿಲ್ಲಾ ಆಸ್ಪತ್ರೆ ಮಡಿಕೇರಿ, ಸಾರ್ವಜನಿಕ ಆಸ್ಪತ್ರೆ ವೀರಾಜಪೇಟೆ, ಮತ್ತು ಸಾರ್ವಜನಿಕ ಆಸ್ಪತ್ರೆ ಸೋಮವಾರಪೇಟೆಯಲ್ಲಿ ಖಾಲಿ ಇರುವ ತಜ್ಞ/ ಸಾಮಾನ್ಯ ಕರ್ತವ್ಯ ವೈದ್ಯರನ್ನು ಒಂದು ವರ್ಷದ ಅವಧಿಗೆ ಮುಂದಿನ ಆದೇಶದವರೆಗೆ ನೇರ ನೇಮಕಾತಿಯಿಂದ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ತಜ್ಞ ಹುದ್ದೆಯ ಎದುರು ಹುದ್ದೆಗೆ ಸಾಮಾನ್ಯ ಕರ್ತವ್ಯ ವೈದ್ಯರಾಗಿ ಮಾಸಿಕ ರೂ.11000/- (ರೂಪಾಯಿ ಹನ್ನೊಂದು ಸಾವಿರಗಳು ಮಾತ್ರ) ರಂತೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಚಾಲ್ತಿ ನಿಯಮದ ಪ್ರಕಾರ ಹಾಗೂ ರೋಸ್ಟರ್ ಪದ್ಧತಿಯನ್ನು ಅಳವಡಿಸಿಕೊಂಡು ನೇಮಕಾತಿ ಮಾಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ | ಹುದ್ದೆಯ ಹೆಸರು ಮತ್ತು ನಿಯೋಜಿಸಿದ ಸ್ಥಳ |
|---|---|---|
| 1. | ಡಾ: ಮಧುಸೂದನ್ ಎನ್.<br>S/o ನಾಗರಾಜ್ ಡಿ.<br>ವೈಎಸ್ ಆಸ್ಪತ್ರೆ, ಮಡಿಕೇರಿ, ದಾಸವಾಳ ರಸ್ತೆ, ಮಡಿಕೇರಿ. | ಸಾಮಾನ್ಯ ಕರ್ತವ್ಯ ವೈದ್ಯರು ಜಿಲ್ಲಾ ಆಸ್ಪತ್ರೆ ಮಡಿಕೇರಿ. |
| 2. | ಡಾ: ಎಸ್. ಬಾಲಾಜಿ<br>S/o ಕೆ. ಸೇತುರಾಮನ್,<br>ಕೂಡ್ಲೂರು ಗ್ರಾಮ ಮತ್ತು ಅಂಚೆ, ಕುಶಾಲನಗರ ಹೋಬಳಿ, ಕೊಡಗು ಜಿಲ್ಲೆ. | ಸಾಮಾನ್ಯ ಕರ್ತವ್ಯ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಸೋಮವಾರಪೇಟೆ. |
| 3. | ಡಾ: ದೇಚಮ್ಮ ಕೆ.ಎ.<br>D/o ಅಚ್ಚಪ್ಪ ಕೆ.ಎನ್.<br>ಶ್ರೀಮಂಗಲ ಗ್ರಾಮ ಮತ್ತು ಅಂಚೆ, ದಕ್ಷಿಣ ಕೊಡಗು. | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ವೀರಾಜಪೇಟೆ, ಕೊಡಗು ಜಿಲ್ಲೆ. |
| 4. | ಡಾ: ಎಂ.ಆರ್. ಮಂಜುನಾಥ್<br>S/o ಎಂ.ಪಿ. ರಾಮರಾಜು, D/No.1/3, ಮಹದೇವಪೇಟೆ, ಮಡಿಕೇರಿ. | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮಡಿಕೇರಿ, ಕೊಡಗು ಜಿಲ್ಲೆ. |

1. ಮೇಲೆ ನಮೂದಿಸಿದ ವೈದ್ಯರು ತಮಗೆ ನಮೂದಿಸಿದ ಸ್ಥಳದಲ್ಲಿ 7 ದಿವಸಗಳ ಒಳಗೆ ಹಾಜರಾಗತಕ್ಕದ್ದು.
2. ಜಿಲ್ಲಾ ಶಸ್ತ್ರ ಚಿಕಿತ್ಸಕರು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಜಾತಿ ಪ್ರಮಾಣ ಪತ್ರ/ ಜನನ ದೃಢೀಕರಣ ಪತ್ರ ಹಾಗೂ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಕ್ರಮವಾಗಿದೆಯೇ ಎಂದು ಖಚಿತ ಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದುಕೊಳ್ಳಲು ಸೂಚಿಸಿದೆ.
3. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರಕಾರದ ಆದೇಶದಲ್ಲಿ ಹೇಳಿರುವ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಒಪ್ಪಿಕೊಂಡಿರುವ ಬಗ್ಗೆ ರೂ.50/- ಛಾಪಾ ಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4. ಈ ಗುತ್ತಿಗೆ ಆಧಾರದ ಮೇಲೆ ನೇಮಕಾತಿಯಾದ ವೈದ್ಯರುಗಳು ಆರೋಗ್ಯ ಇಲಾಖೆಯಿಂದ/ ಜಿಲ್ಲಾ ಶಸ್ತ್ರ ಚಿಕಿತ್ಸಕರು/ ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಯವರು ನಿಗದಿಪಡಿಸಿದ ವೈದ್ಯಾಧಿಕಾರಿಗಳ ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಬದ್ಧರಿರಬೇಕು.

5. ಕೇಂದ್ರ ಸ್ಥಾನದಲ್ಲಿ ವಾಸವಿದ್ದು 24 ಗಂಟೆಗಳಲ್ಲೂ ಯಾವುದೇ ತುರ್ತು ಸೇವೆಗೆ/ ರಾತ್ರಿ ಪಾಳಿಗೆ ತುರ್ತು ವಿಭಾಗಗಳಲ್ಲಿ ಲಭ್ಯವಿರುವಂತೆ ಸೂಚಿಸಿದೆ.

6. ತಾತ್ಕಾಲಿಕ ಸರ್ಕಾರಿ ನೌಕರನಿಗೆ ಸಿಗುವಂತಹ ಎಲ್ಲಾ ವೈದ್ಯಕೀಯ ಸೌಲಭ್ಯ ಪಡೆಯಲು ಹಾಗೂ ದುರ್ನಡತೆಯಿಂದಾಗಿ ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಬದ್ಧರಿರತಕ್ಕದ್ದು.

7. ಖಾಯಂ ನೇಮಕಾತಿಗಾಗಲಿ, ವಿಶ್ರಾಂತಿ ವೇತನಕ್ಕಾಗಲೀ, ನಿವೃತ್ತಿ ಉಪದಾನಕ್ಕಾಗಲೀ ವೇತನ ಶ್ರೇಣಿಗಾಗಲೀ ಅಥವಾ ಯಾವುದೇ ಭತ್ಯೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುವುದಿಲ್ಲ.

8. ಈ ಸ್ಥಳಗಳಿಂದ ಇನ್ನೊಮ್ಮೆ ಬೇರೆ ಕಡೆಗೆ ವರ್ಗಾವಣೆಗೆ ಅವಕಾಶವಿರುವುದಿಲ್ಲ.

ಜಿಲ್ಲಾಧಿಕಾರಿಗಳು,

ಪಿ.ಆರ್.1451 ಕೊಡಗು ಜಿಲ್ಲೆ, ಮಡಿಕೇರಿ.

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಇಡಿ 99 ಯುಪಿಸಿ 2006, ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್, 2006

ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-1ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಎನ್.ಇ.ಟಿ/ ಎಸ್.ಎಲ್.ಇ.ಟಿ./ ಪಿ.ಹೆಚ್.ಡಿ./ ಎಂ.ಫಿಲ್‌ನ್ನು ಇನ್ನೂ ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ/ ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಖಾಸಗಿ ಅನುದಾನಿತ ಪದವಿ ಕಾಲೇಜಿನಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ/ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರು ಎನ್.ಇ.ಟಿ./ ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಲು ದಿನಾಂಕ:12.02.2007ರ ವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಇವರು ಎನ್.ಇ.ಟಿ./ ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಇವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯು.ಜಿ.ಸಿ. ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಇವರು ಎನ್.ಇ.ಟಿ./ ಎಸ್.ಎಲ್.ಇ.ಟಿ.ಯನ್ನು ದಿನಾಂಕ:12.02.2007ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ) (ವಿಶೇಷ) ನಿಯಮಗಳು 2003ರ ನಿಯಮ 6ರನ್ವಯ ಸೇವೆಯಿಂದ ತೆಗೆದುಹಾಕಲಾಗುವುದು.

(iv) ಎನ್.ಇ.ಟಿ./ ಎಸ್.ಎಲ್.ಇ.ಟಿ. ಯನ್ನು ನಿಗದಿತ ಅವಧಿಯೊಳಗೆ ಪಾಸುಮಾಡದಿದ್ದಲ್ಲಿ ಅವರುಗಳನ್ನು ಸೇವೆಯಿಂದ ತೆಗೆದು ಹಾಕಲಾಗುವುದೆಂದು ಅವರ ಗಮನಕ್ಕೆ ಬಂದಿದೆಯೆಂದು ರೂ.20ರ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಕಾಲೇಜು ಶಿಕ್ಷಣ ಆಯುಕ್ತರು ಸಂಬಂಧಿಸಿದ ಅಭ್ಯರ್ಥಿಗಳಿಂದ ಪಡೆದುಕೊಳ್ಳತಕ್ಕದ್ದು.

(v) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ: ಜಾತಿ/ ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

(vi) ಶ್ರೀ ಕರಣಂ ಗಿರಿರಾಜಕುಮಾರ್ ಇವರಿಗೆ ಗದಗದಲ್ಲಿನ ಆದರ್ಶ ಶಿಕ್ಷಣ ಸಂಸ್ಥೆಯ ವಾಣಿಜ್ಯ ಕಾಲೇಜಿನ ಆಡಳಿತ ಮಂಡಳಿಯು ನಿರಾಕ್ಷೇಪಣ ಪತ್ರ ನೀಡಿರುವುದನ್ನು ಖಚಿತಪಡಿಸಿಕೊಂಡು ಸೇವಾ ಸಕ್ರಮಾತಿಗೊಳಿಸುವುದು.

2. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡುಬಂದಲ್ಲಿ ಸರಿಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

3. ಈ ಅರೆಕಾಲಿಕ ಉಪನ್ಯಾಸಕರು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಆಯಾಯ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ-4,

ಶಿಕ್ಷಣ ಇಲಾಖೆ.

### ಸರ್ಕಾರಿ ಆದೇಶ ಸಂಖ್ಯೆ: ಇಡಿ 99 ಯುಪಿಸಿ 2006, ದಿನಾಂಕ:19.09.2006ರ ಅನುಬಂಧ-1

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993-94 ಹಾಗೂ 1994-95ನೇ ಸಾಲಿನಲ್ಲಿ ಪದವಿ ಕಾಲೇಜಿನಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಯು ಅದೇ ಕಾಲೇಜಿನಲ್ಲಿ ಕಾರ್ಯಭಾರವಿಲ್ಲದ ಪ್ರಯುಕ್ತ ಬೇರೊಂದು ಪದವಿ ಕಾಲೇಜಿನಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸಿರುವ ಅಭ್ಯರ್ಥಿಯನ್ನು ರಾಜ್ಯ ವೇತನ ಶ್ರೇಣಿ ರೂ.6000-11200ರಲ್ಲಿ ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಯ ಪಟ್ಟಿ.

**ಧಾರವಾಡ ವಿಭಾಗ:**

| ಕ್ರ. ಸಂ. | ಕಾಲೇಜು/ ಆಡಳಿತ ಮಂಡಳಿ ಹೆಸರು | ಬೇರೆ ಆಡಳಿತ ಮಂಡಳಿಗಳಿಂದ/ ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ತಂದಿರುವ ಕಾಲೇಜಿನ ಹೆಸರು | ಅಭ್ಯರ್ಥಿಯ ಹೆಸರು/ ಶ್ರೀ/ ಶ್ರೀಮತಿ | ಬೋಧಿಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸಲಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಉಗಮದೇವಿ ಭವಹರಲಾಲ್ ನಾಹರ್ ಥಿಯೋಸಾಫಿಕಲ್ ಮಹಿಳಾ ಕಾಲೇಜು, ಹೊಸಪೇಟೆ. | ಆದರ್ಶ ಶಿಕ್ಷಣ ಸಂಸ್ಥೆಯ ವಾಣಿಜ್ಯ ಕಾಲೇಜು, ಗದಗ. | ಶ್ರೀ ಕರಣಂ ಗಿರಿಜಾಕುಮಾರ್ | ಸಂಖ್ಯಾಶಾಸ್ತ್ರ | 19.10.1965 | ಸಾಮಾನ್ಯ |

**ಸಿ. ಬಸವರಾಜು**

ಪಿ.ಆರ್.1452

ಸರ್ಕಾರದ ಉಪ ಕಾರ್ಯದರ್ಶಿ-4,
ಶಿಕ್ಷಣ ಇಲಾಖೆ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್.-102/ 2006 ಎಫ್, ದಿನಾಂಕ:20ನೇ ಸೆಪ್ಟೆಂಬರ್, 2006**

| ಅರ್ಜಿದಾರರು: | ಪ್ರತಿವಾದಿಗಳು: |
|---|---|
| 1) ಶ್ರೀ ರಾಜೀವಶೆಟ್ಟಿ S/o ದಿ: ರಾಮಣ್ಣಶೆಟ್ಟಿ.<br>2) ಸಂತೋಷ ಶೆಟ್ಟಿ S/o ರಾಜೀವಶೆಟ್ಟಿ.<br>3) ಸುರೇಶ್ ಶೆಟ್ಟಿ, S/o ರಾಜೀವಶೆಟ್ಟಿ.<br>4) ಕು: ಆಶಾ D/o ರಾಜೀವಶೆಟ್ಟಿ.<br>ವಾಸ: ಕೊಳ್ಕೆಬೈಲ್, ಜಡ್ಡಿನಮನೆ, ಸಿದ್ದಾಪುರ ಗ್ರಾಮ, ಕುಂದಾಪುರ. | 1) ಅನಿಲ್ ಚಾತ್ರಾ, ಬಿನ್ ಸಚ್ಚಿದಾನಂದ ಚಾತ್ರಾ, ಶ್ರೀ ದುರ್ಗಾಂಭ ಮೋಟಾರ್ಸ್, ಮೈನ್ ರೋಡ್ ಕುಂದಾಪುರ.<br>2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಡಿವಿಜನಲ್ ಆಫೀಸ್, ಉಡುಪಿ ಬ್ರಾಂಚ್, ಉಡುಪಿ-576101. |

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ರಾಜೀವಶೆಟ್ಟಿ ಇವರು ತಮ್ಮ ಮಗನಾದ ಶ್ರೀ ದಿ: ಸತೀಶ ಶೆಟ್ಟಿ ಕಂಡಕ್ಟರ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಅನಿಲ್ ಚಾತ್ರಾ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:04.05.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಪಿ.ಆರ್.1454

ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಮಂಗಳೂರು ವಿಭಾಗ, ಮಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ಜಿಲ್ಲಾನೋಂದಣಿ ಅಧಿಕಾರಿಗಳು ಬೆಳಗಾವಿ ಇವರ ನಡವಳಿಗಳು

**ವಿಷಯ:** ಬೆಳಗಾವಿ ಜಿಲ್ಲೆಯಲ್ಲಿನ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀಮತಿ ಎಸ್.ಆರ್. ಲಲಿತಮ್ಮ W/o ಆರ್.ಎಲ್. ಗಂಗಯ್ಯ ಬಾಲಾಜಿನಗರ, ಶಿರಾ ಟೌನ್, ತುಮಕೂರು ಜಿಲ್ಲೆ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: DPAR:13:SBC:2001:ದಿನಾಂಕ:21.11.2001ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.

(2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-274/01-02 ದಿನಾಂಕ:18.08.2006.

(3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:7/ 2006-07, ದಿನಾಂಕ:18.08.2006.

(4) ಶ್ರೀಮತಿ ಎಸ್.ಆರ್. ಲಲಿತಮ್ಮ W/o ಗಂಗಯ್ಯ, ಶಿರಾಟೌನ್, ತುಮಕೂರು ಜಿಲ್ಲೆ, ಇವರ ಲಿಖಿತ ಮನವಿ ದಿನಾಂಕ:25.08.2006.

**ಪ್ರಸ್ತಾವಿತ:**

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ನೇಮಕಾತಿ

ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇರೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ಬೆರಳಚ್ಚುಗಾರರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್.ಸಿ/ ಎಸ್‌ಟಿ | ಅಭ್ಯರ್ಥಿಯನ್ನು ಬೆರಳಚ್ಚುಗಾರರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 01. | ಶ್ರೀಮತಿ ಲಲಿತಮ್ಮ ಎಸ್.ಆರ್. W/o ಗಂಗಯ್ಯ, ಶಿರಾ ಟೌನ್, 572137 ತುಮಕೂರು ಜಿಲ್ಲೆ. | ಎಸ್‌ಸಿ | ಜಿಲ್ಲಾ ನೋಂದಣಿ ಕಛೇರಿ, ಕಛೇರಿ ಬೆಳಗಾವಿ, ಬೆಳಗಾವಿ ಜಿಲ್ಲೆ. | ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಮುಖ್ಯ ಪಟ್ಟಿ. |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ:30.08.2006ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ:02.09.2006ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ಮೇಲ್ಕಂಡ ಅಭ್ಯರ್ಥಿಯು ಉಲ್ಲೇಖ (4)ರ ತಮ್ಮ ಲಿಖಿತ ಮನವಿಯಲ್ಲಿ ತಾವು ಈಗಾಗಲೇ ಲೋಕೋಪಯೋಗಿ ಇಲಾಖೆಯಲ್ಲಿ ಬೆರಳಚ್ಚುಗಾರ್ತಿಯಾಗಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದಿನಾಂಕ:14.08.2003 ರಿಂದ ಕೆಲಸ ನಿರ್ವಹಿಸುತ್ತಿದ್ದು, ತಾವು ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ವಾಸಿಯಾಗಿದ್ದು, ತಮಗೆ ಕೌಟುಂಬಿಕ ತೊಂದರೆಯಿಂದ ಬೆಳಗಾವಿ ಜಿಲ್ಲೆಗೆ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗುವುದಿಲ್ಲ. ತಮಗೆ ತುಮಕೂರು ಜಿಲ್ಲೆಯಲ್ಲಿ ಕೆಲಸ ನಿರ್ವಹಿಸಲು ಅವಕಾಶ ಕಲ್ಪಿಸಿದರೆ ಮಾತ್ರ ಕೆಲಸಕ್ಕೆ ಹಾಜರಾಗುವುದಾಗಿಯೂ ಇಲ್ಲದಿದ್ದ ಪಕ್ಷದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಬೆರಳಚ್ಚುಗಾರರಾಗಿ ಕೆಲಸ ನಿರ್ವಹಿಸುತ್ತೇನೆಂದು ಅಭಿಪ್ರಾಯ ಸಲ್ಲಿಸುತ್ತಾ ತಮ್ಮ ನೇಮಕಾತಿ ಆದೇಶವನ್ನು ರದ್ದುಪಡಿಸಬಹುದೆಂದು ವಿನಂತಿಸಿರುತ್ತಾರೆ. ಮೇಲ್ಕಂಡ ಕಾರಣಗಳಿಂದ ಸದರಿ ಅಭ್ಯರ್ಥಿಯ ಉಲ್ಲೇಖ (4)ರ ಮನವಿಯನ್ನು ಕಾನೂನು ರೀತ್ಯಾ ಪರಿಗಣಿಸಲಾಗದ ಕಾರಣ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ/ 75/ 2006-07, ದಿನಾಂಕ:19ನೇ ಸೆಪ್ಟೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀಮತಿ ಎಸ್.ಆರ್. ಲಲಿತಮ್ಮ W/o ಆರ್.ಎಲ್. ಗಂಗಯ್ಯ, ಬಾಲಾಜಿನಗರ, ಶಿರಾ ಟೌನ್, ತುಮಕೂರು ಜಿಲ್ಲೆ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬೆರಳಚ್ಚುಗಾರರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ
ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಬೆಳಗಾವಿ ಜಿಲ್ಲೆ, ಬೆಳಗಾವಿ.

ಪಿ.ಆರ್.1455

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ 3,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029**

**ಪ್ರಕಟಣೆ**

**ಸಂಖ್ಯೆ: ಡಬ್ಲ್ಯೂಸಿಎ:ಎಫ್.ಸಿ./ ಸಿ.ಆರ್.-84/ 2006, ದಿನಾಂಕ:20ನೇ ಸೆಪ್ಟೆಂಬರ್, 2006**

ದಿವಂಗತ ಎಂ. ಮುನಿಯಪ್ಪ, ಚಾಲಕ, ಬಿಲ್ಲೆ ಸಂಖ್ಯೆ: 6467, 4ನೇ ಘಟಕ, ಬೆಂಗಳೂರು, ಇವರಿಗೆ ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ಅನ್ವಯ ಸಲ್ಲಬೇಕಾದ ಪರಿಹಾರವನ್ನು ವಿಭಾಗೀಯ ನಿಯಂತ್ರಣಾಧಿಕಾರಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಕೇಂದ್ರ ವಿಭಾಗ, ಬೆಂಗಳೂರು ರವರು ಈ ಕಛೇರಿಯಲ್ಲಿ ಠೇವಣಿ ಇಟ್ಟು ದಿವಂಗತ ನಾಮನಿರ್ದೇಶಿಗಳ ವಿಳಾಸ ನೀಡಿರುತ್ತಾರೆ. ಅವರ ವಿಳಾಸ: ಶ್ರೀಮತಿ ದಿವಂಗತ ಎಂ. ಮುನಿಯಪ್ಪನವರ ಪತ್ನಿ, ಚಿಕ್ಕಗಳೂರು, ಕುಡೇನೂರು ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎಸ್.ಎಸ್. ಷರೀಫ್**
ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ-3, ಬೆಂಗಳೂರು.

ಪಿ.ಆರ್.1456

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

ಸಂಖ್ಯೆ: ಎಲ್.ಎನ್.ಡಿ.(ಎನ್) ಸಿ.ಆರ್.:415/ 05-06, ದಿನಾಂಕ:11ನೇ ಸೆಪ್ಟೆಂಬರ್, 2006

ವಿಷಯ: ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕುದುರೆಗೆರೆ ಗ್ರಾಮದ ಸ.ನಂ.18ರ ಸರ್ಕಾರಿ ಗೋಮಾಳದಲ್ಲಿ ಸಾರ್ವಜನಿಕರಿಗೆ ಕುಡಿಯುವ ನೀರಿನ ಟ್ಯಾಂಕ್ ನಿರ್ಮಿಸಲು 60X40 ವಿಸ್ತೀರ್ಣ ಜಮೀನು ಕಾಯ್ದಿರಿಸುವ ಬಗ್ಗೆ.

ಉಲ್ಲೇಖ: 1) ಸರ್ಕಾರದ ಪತ್ರ ಸಂಖ್ಯೆ: ಆರ್.ಡಿ.600 ಎಲ್.ಜಿ.ಬಿ.2006, ದಿನಾಂಕ:31.07.2006.

2) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ.: ಸಿ.ಆರ್.:267/ 05-06, ದಿನಾಂಕ:22.02.2006.

ಕಾರ್ಯದರ್ಶಿ, ಆಲೂರು ಗ್ರಾಮ ಪಂಚಾಯ್ತಿರವರು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರಿಗೆ ಮನವಿ ಸಲ್ಲಿಸಿ ಬೆಂಗಳೂರು ನಗರ ಜಿಲ್ಲಾ ಪಂಚಾಯ್ತಿ ವತಿಯಿಂದ ಕುದುರೆಗೆರೆ ಮತ್ತು ಕುದುರೆಗೆರೆ ಕಾಲೋನಿ ಗ್ರಾಮಗಳನ್ನೊಳಗೊಂಡಂತೆ ಕೊಳವೆ ನೀರು ಸರಬರಾಜು ಯೋಜನೆ ಮಂಜೂರು ಆಗಿದ್ದು ಇದಕ್ಕೆ ಸಂಬಂಧಿಸಿದಂತೆ ಓವರ್ ಹೆಡ್ ಟ್ಯಾಂಕ್ ನಿರ್ಮಿಸಲು ಕುದುರೆಗೆರೆ ಗ್ರಾಮ ಸ.ನಂ.18ರಲ್ಲಿನ ಸರ್ಕಾರಿ ಗೋಮಾಳದಲ್ಲಿ 60x40 ಅಡಿಯಷ್ಟು ನಿವೇಶನವನ್ನು ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಸದರಿ ವಿಷಯಕ್ಕೆ ಸಂಬಂಧಿಸಿದಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರು ಉಲ್ಲೇಖಿದ ಪತ್ರದಲ್ಲಿ ಕುದುರೆಗ್ರಾಮ ಸ.ನಂ.18 ಸರ್ಕಾರಿ ಗೋಮಾಳವಾಗಿದ್ದು ಒಟ್ಟು 37.03 ಎಕರೆಗುಂಟೆ ಇರುತ್ತದೆ. ಈ ಪೈಕಿ 24.00 ಎಕರೆ: ಗುಂಟೆ ಮಂಜೂರು ಆಗಿದ್ದು ಬಾಕಿ 3.13 ಎಕರೆ: ಗುಂಟೆ ಇರುತ್ತದೆ. ಇದು ಬೆಂಗಳೂರು ಮಹಾನಗರ ಪಾಲಿಕೆಯಿಂದ 18 ಕಿ.ಮೀ. ಒಳಗಡೆ ಇದ್ದು ಹಸಿರುಪಟ್ಟಿ ವಲಯದಲ್ಲಿರುತ್ತದೆ.

ಆದ್ದರಿಂದ ಸ.ನಂ.18ರಲ್ಲಿ 0.02 ಗುಂಟೆ ಜಮೀನನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಕೊಳವೆ ನೀರು ಸರಬರಾಜು ಯೋಜನೆಯಡಿಯಲ್ಲಿ ಓವರ್ ಹೆಡ್ ಟ್ಯಾಂಕ್ ನಿರ್ಮಿಸಲು ಪಂಚಾಯ್ತಿಗೆ ಜಮೀನು ನೀಡಬಹುದೆಂದು ತಿಳಿಸಿರುತ್ತಾರೆ. ಅದರಂತೆ ಈ ಕಛೇರಿಯಿಂದ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ಪ್ರಸ್ತಾಪಿತ ಜಮೀನನ್ನು ಆಲೂರು ಗ್ರಾಮಪಂಚಾಯ್ತಿಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರನ್ವಯ ಪಂಚಾಯಿತಿಗೆ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಲಾಗಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

ತಹಶೀಲ್ದಾರ್ ವರದಿಯಂತೆ ಹಾಗೂ ಸರ್ಕಾರದ ಪೂರ್ವಾನುಮೋದನೆಯಂತೆ, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕುದುರೆಗೆರೆ ಗ್ರಾಮ ಸ.ನಂ.18ರ ಸರ್ಕಾರಿ ಗೋಮಾಳದಲ್ಲಿ 0.02 ಗುಂಟೆ ಜಮೀನನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಕೊಳವೆ ನೀರು ಸರಬರಾಜು ಯೋಜನೆಯಡಿಯಲ್ಲಿ ಓವರ್ ಹೆಡ್ ಟ್ಯಾಂಕ್ ನಿರ್ಮಿಸಲು ಈ ಕೆಳಕಂಡ ಚಕ್ಕುಬಂದಿಯುಳ್ಳ

ಪೂರ್ವಕ್ಕೆ: ಮಹಮದ್ ಗೌಸ್.
ಪಶ್ಚಿಮಕ್ಕೆ: ಕಾಲೋನಿ.
ಉತ್ತರಕ್ಕೆ: ರಸ್ತೆ.
ದಕ್ಷಿಣಕ್ಕೆ : ಮಹಮದ್ ಗೌಸ್.

ಜಮೀನನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಿದೆ. ಸದರಿ ಜಮೀನನ್ನು ಆಲೂರು ಗ್ರಾಮ ಪಂಚಾಯ್ತಿಗೆ ವರ್ಗಾಯಿಸಲು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರಿಗೆ ಸೂಚಿಸಿದೆ.

### ಷರತ್ತುಗಳು

1) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರು ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.
2) ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಯಾವುದೇ ತಿಳುವಳಿಕೆ ನೀಡದೆ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.
3) ಸದರಿ ಜಮೀನನ್ನು ಸಾರ್ವಜನಿಕರ ನೀರು ಸರಬರಾಜು ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಪಿ.ಆರ್.1472 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

ಸಂಖ್ಯೆ: ಎಲ್.ಎನ್.ಡಿ.(ಎನ್) ಸಿ.ಆರ್.132/ 04-05, ದಿನಾಂಕ:26ನೇ ಸೆಪ್ಟೆಂಬರ್, 2006

ವಿಷಯ: ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ದಾಸನಪುರ ಗ್ರಾಮದ ಸ.ನಂ.100ರಲ್ಲಿ 25.00 ಎಕರೆ ಜಮೀನನ್ನು ಕರ್ನಾಟಕ ಆದಿಜಾಂಬವ ಸಾಮಾಜಿಕ ಮತ್ತು ಶೈಕ್ಷಣಿಕ ದತ್ತಿ, ಬೆಂಗಳೂರು ಇವರಿಗೆ ವೈದ್ಯಕೀಯ ಕಾಲೇಜು ಸ್ಥಾಪನೆಗೆ ಮಂಜೂರು ಮಾಡುವ ಬಗ್ಗೆ.

ಉಲ್ಲೇಖ: 1) ಸರ್ಕಾರದ ಪತ್ರ ಸಂಖ್ಯೆ: ಆರ್.ಡಿ.257 ಎಲ್.ಜಿ.ಬಿ.2000, ದಿನಾಂಕ:03.11.2005.

2) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.121 ಎಲ್.ಜಿ.ಬಿ. 2006 ದಿನಾಂಕ:24.07.2006.

3) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ.: ಸಿ.ಆರ್.:148/ 04-05, ದಿನಾಂಕ:23.12.2004.

4) ಕಾರ್ಯದರ್ಶಿ, ಕರ್ನಾಟಕ ಆದಿಜಾಂಬವ ಸಾಮಾಜಿಕ ಮತ್ತು ಶೈಕ್ಷಣಿಕ ದತ್ತಿ ರವರ ಪತ್ರ ಸಂಖ್ಯೆ: 763 ಕೆಎಎಸ್ಇಟಿ: ಬಿಜೆಆರ್: ಎಂ.ಪಿ.ಎನ್.ಸಿ: 2006-07, ದಿನಾಂಕ:06.09.2006.

ಕರ್ನಾಟಕ ಆದಿಜಾಂಬವ ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆ (ರಿ) ರವರು ದಿನಾಂಕ:03.07.2004 ರಂದು ಮಾನ್ಯ ಕಂದಾಯ ಸಚಿವರಿಗೆ ಮನವಿ ಸಲ್ಲಿಸಿ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಸ.ನಂ. 100ರಲ್ಲಿ 25.00 ಎಕರೆ ಜಮೀನನ್ನು ವೈದ್ಯಕೀಯ ಕಾಲೇಜು ನಡೆಸಲು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿದ್ದು, ಸದರಿ ಸಂಸ್ಥೆಯವರು ಗುತ್ತಿಗೆಯ ಜಮೀನನ್ನು ಕಾಯಂ ಮಂಜೂರಾತಿ ಕೋರಿರುತ್ತಾರೆ. ಈ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಈ ಹಿಂದೆ ಗುತ್ತಿಗೆ ನೀಡಿದ ಜಮೀನನ್ನು ಕರ್ನಾಟಕ ಆದಿಜಾಂಬವ ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆ ಇವರಿಗೆ 1.00 ಎಕರೆಗೆ 1.00 ಲಕ್ಷ ರಿಯಾಯಿತಿ ದರದಲ್ಲಿ ಶಾಶ್ವತವಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ಕಲಂ 21ರ ಪ್ರಕಾರ ಇತರೆ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಲು ಪೂರ್ವಾನುಮೋದನೆ ನೀಡಲಾಗಿರುತ್ತದೆ.

ಈ ಬಗ್ಗೆ ಸಂಸ್ಥೆಯವರಿಗೆ ಈ ಕಛೇರಿಯಿಂದ ದಿನಾಂಕ:05.12.2005 ರಂದು ತಿಳುವಳಿಕೆ ಪತ್ರ ನೀಡಿ ಜಮೀನಿನ ಮೌಲ್ಯ ರೂ.25.00 ಲಕ್ಷ ಮತ್ತು ಭೂ ಪರಿವರ್ತನೆ ಶುಲ್ಕ 43,56,000-00 ಮತ್ತು ಪೋಡಿ ಶುಲ್ಕ 55.00 ರೂ.ಗಳನ್ನು ಸೇರಿ ಒಟ್ಟು 68,56,055-00 ಗಳನ್ನು ಪಾವತಿಸಲು ಸೂಚಿಸಲಾಗಿರುತ್ತದೆ. ಆದರೆ ಸಂಸ್ಥೆಯವರು ಭೂ ಪರಿವರ್ತನಾ ಶುಲ್ಕ ಮನ್ನಾಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದು, ಉಲ್ಲೇಖ (2)ರ ಸರ್ಕಾರದ ಪತ್ರದಲ್ಲಿ ಅರ್ಜಿದಾರರ ಮನವಿಯನ್ನು ತಿರಸ್ಕರಿಸಲಾಗಿರುತ್ತದೆ. ಅದರಂತೆ ಅರ್ಜಿದಾರರಿಗೆ ದಿನಾಂಕ:28.12.2005 ರಂದು ನೀಡಿದ ಈ ಕಛೇರಿಯ ತಿಳುವಳಿಕೆ ಪತ್ರದಂತೆ ರೂ.68,56,055-00 ಗಳನ್ನು ಪಾವತಿಸಲು ದಿನಾಂಕ: 03.08.2006ರಂದು ತಿಳುವಳಿಕೆ ನೀಡಲಾಗಿರುತ್ತದೆ. ಅದರಂತೆ ಅರ್ಜಿದಾರರು ಉಲ್ಲೇಖ (4)ರಲ್ಲಿ ಸರ್ಕಾರಕ್ಕೆ ಹಣ ಪಾವತಿಸಿ ಚಲನ್ ನಂ.67/8, ದಿನಾಂಕ:05.09.2006ರಂದು ಹಾಜರುಪಡಿಸಿರುತ್ತಾರೆ ಮತ್ತು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಕೋರಿರುತ್ತಾರೆ.

ಅದರಂತೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಕರ್ನಾಟಕ ಆದಿಜಾಂಬವ ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆ (ರಿ) ರವರಿಗೆ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ದಾಸನಪುರ ಗ್ರಾಮದ ಸ.ನಂ.100 ರಲ್ಲಿ 25.00 ಎಕರೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾದ ಜಮೀನನ್ನು ಖಾಯಂ ಮಂಜೂರು ಮಾಡಲಾಗಿದೆ.

ಷರತ್ತುಗಳು

1. ಮಂಜೂರಾಗಿರುವ ಜಮೀನನ್ನು ಯಾರಿಗೂ ಪರಭಾರೆ ಮಾಡತಕ್ಕದ್ದಲ್ಲ.
2. ಮಂಜೂರು ಮಾಡಿದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರಾಗಿದೆಯೋ ಅದೇ ಉದ್ದೇಶಕ್ಕೆ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು. ಬೇರೆ ಉದ್ದೇಶಕ್ಕೆ ಉಪಯೋಗಿಸಿದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
3. ಮಂಜೂರು ಮಾಡಿದ ಜಮೀನಿನಲ್ಲಿ ವಿನಾಶಕಾರಿಯಾದ ಅಥವಾ ಹಾನಿಕಾರಕವಾದ ಯಾವುದೇ ಕೆಲಸವನ್ನು ಮಾಡತಕ್ಕದ್ದಲ್ಲ.
4. ಮಂಜೂರು ಮಾಡಿರುವ ಜಮೀನಿನ ಭೂಮಿಯ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕಾಗಿ ಸರ್ಕಾರಕ್ಕೆ ಅಗತ್ಯವಾಗಿ ಬೇಕಾದಲ್ಲಿ ಆ ಪ್ರದೇಶವನ್ನು ಯಾವ ತಿಳುವಳಿಕೆಯನ್ನು ನೀಡದೇ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.
5. ಮಂಜೂರು ಮಾಡಿದ ಜಮೀನನ್ನು ಸ್ವಾಧೀನ ಪಡೆದ 2 ವರ್ಷಗಳೊಳಗಾಗಿ ಮಂಜೂರಾದ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.
6. ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
7. ಶಾಸನಬದ್ಧ ಕಾಯ್ದೆಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಜಮೀನಿನ ಮಂಜೂರಾತಿಯನ್ನು ಯಾವ ಮುನ್ಸೂಚನೆಯು ಇಲ್ಲದೆ ವಜಾ ಮಾಡಲಾಗುವುದು.
8. ಈ ಮಂಜೂರಾತಿಯು ಘನ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ರಿಟ್ ಅರ್ಜಿ ಸಂಖ್ಯೆ: 25310/01ರ ಮೇಲಿನ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.
9. ಪ್ರಶ್ನಿತ ಜಮೀನನ್ನು ಯಾರಿಗೂ ಕ್ರಯ, ದಾನ, ಗುತ್ತಿಗೆ, ಆಧಾರ ವಗೈರೆ ಮಾಡುವಂತಿಲ್ಲ.
10. ಪ್ರಶ್ನಿತ ಜಮೀನಿನಲ್ಲಿ ಸಿಗುವ ನಿಧಿ, ನಿಕ್ಷೇಪ ಇತ್ಯಾದಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1473

**OFFICE OF THE EXECUTIVE ENGINEER, NO.5 BHADRA CANAL DIVISION, DAVANGERE-577005**

**NOTIFICATION**

**No.BCD.5/ Information Act 2005/ 2006-07/ 1614/10, Dated:19th September, 2006**

Under Section.5 (1) of Rights- to information Act 2005 (Central Act 22 of 2005) Sri Odogangappa, Executive Engineer, No.5 Bhadra Canal Division is appointed as Public Information Officer to provide information relating to No.5 Bhdra Canal Division, Davangere to the persons seeking such information under the provision of the Act.

Under Sub-section (2) of Section 5 of Rights to information Act 2005, Sri C. Rajakumara Reddy, Assistant Executive Engineer, is appointed as Assistant Information Officer to receive Applications for information or appeals relating Lift Irrigation Project Sub-Division Haveri.

Superintending Engineer, Bhadra Project Circle, B.R. Project is our Appellate authority under Section. 19 (1) of the Right to Information Act, 2005 to exercise the powers provided under the Act.

Executive Engineer,
No.5 Bhadra Canal Division, Davangere.

NIC- Haveri

**RTIKAR-BLANK FORMAT SHEET**
**RTIKAR MASTER DATA FORMAT**
**(http:// h164.100.80.120/rtikarmaster)**

**Department:** Water Resources Department.
**Sub Unit:** Executive Engineer, No.5 Bhadra Canal Division, Davangere.
**Category 1:**................07.............................
Option: 1. Authority, 2.Autonomos Body, 3. Boards, 4. Communication, 5. Company, 6. Corporation, 7. Department, 8. Society, 9. University.
**Category 2:**................01.............................
Option: 1. By or under the Constitution, 2. By any other law made by the parliament, 3. by any other law made by the legislature & 4. by notification issued or under made by the appropriate Govt.
**Category 3:**................---.............................
Option: 1. Body owned Controlled or substantially furnished. 2. Non Govt. organisation substantially furnished.
**Taluk:**.....................Nil...............................(If Applicable)
**Village:**...................Nil...............................(If Applicable)

**1) Public Authority:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | Secretary, Water Resources Department, Govt. of Karnataka. | Vikasa Soudha, 3rd Floor Ambedkar Vidhi, Bangalore-560001. | 9580-22255306 | - | 9580-22255306 | - |

**2) Appellate Authority:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | Superintending Engineer. | Bhadra Project Circle, B.R. Project-577115, Shimoga District. | 958282 256338 | 958282 256247 | 358282 256231 | - |

**3) Public Information Officer:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | ExecutiveEngineer. | No.5 Bhadra Canal Division, Hadadi Road, Davangere-577005. | 958192 264669 | Nil Nil | 958192 264669 | - |

**4) Assistant Public Information Officer:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | Asst. Executive Engineer. | Lift Irrigation Project Sub-Division, Haveri-581110. | 958375 232993 | Nil | Nill | - |

Executive Engineer,
No.5 Bhadra Canal Division,
Davangere.

PR-1475

**OFFICE OF THE EXECUTIVE ENGINEER, NO.5 BHADRA CANAL DIVISION, DAVANGERE-577005**

**NOTIFICATION**

**1670-13, Dated:25th September, 2006**

Under Section.5 (1) of Rights- to information Act 2005 (Central Act 22 of 2005) Sri Odogangappa, Executive Engineer, No.5 Bhadra Canal Division is appointed as Public Information Officer to provide information relating to No.5 Bhdra Canal Division, Davangere to the persons seeking such information under the provision of the Act.

Under Sub-section (2) of Section 5 of Rights to information Act 2005, Sri

| | | |
|---|---|---|
| (1) | Sri Annappa, | Asst. Executive Engineer, No.1 Bhdara Canal Sub-Division, Davangere-577005. |
| (2) | B.E. Shivakumar | Asst. Executive Engineer, No.2 Bhdara Canal Sub-Division, Davangere. |
| (3) | I. Sreedhar | Asst. Executive Engineer, No.3 Bhdara Canal Sub-Division, Thyavanige, Channagiri Taluk. |
| (4) | H. Tata Shivan | Asst. Executive Engineer, No.4 H.B. Canal Sub-Division, Harihar, Harihar Taluk. |

are appointed as Assistant Information Officer to receive applications for information or appeals relating to No.5 Bhdara Canal Division, Davangere-577005.

Superintending Engineer, Bhadra Project Circle, B.R. Project is our Appeallate authority under Section 19(1) f the Right to information Act 2005 to exercise the powers provided the Act.

Executive Engineer,
No.5 Bhadra Canal Division, Davangere.

**NIC- DXG**

**RTIKAR-BLANK FORMAT SHEET**
**RTIKAR MASTER DATA FORMAT**
**(http:// h164.100.80.120/rtikarmaster)**

**Department:** Water Resources Department.
**Sub Unit:** Executive Engineer, No.5 Bhadra Canal Division, Davangere.
**Category 1:**................07.............................
Option: 1. Authority, 2.Autonomos Body, 3. Boards, 4. Communication, 5. Company, 6. Corporation, 7. Department, 8. Society, 9. University.
**Category 2:**................01.............................
Option: 1. By or under the Constitution, 2. By any other law made by the parliament, 3. by any other law made by the legislature & 4. by notification issued or under made by the appropriate Govt.
**Category 3:**................---.............................
Option: 1. Body owned Controlled or substantially furnished. 2. Non Govt. organisation substantially furnished.
**Taluk:**....................Harihar..................(If Applicable)
**Village:**...................Thyavanige................................(If Applicable)

**1) Public Authority:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | Secretary, Water Resources Department, Govt. of Karnataka. | Vikasa Soudha, 3rd Floor Ambedkar Vidhi, Bangalore-560001. | 9580-22255306 | 9580-22255306 | - | - |

**2) Appellate Authority:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | Superintending Engineer. | Bhadra Project Circle, B.R. Project-577115, Shimoga District. | 958282 256338 | 958282 256247 | 958282 256231 | - |

**3) Public Information Officer:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | ExecutiveEngineer. | No.5 Bhadra Canal Division, Hadadi Road, Davangere-577005. | 958192 264669 | Nil | 958182 264669 | - |

**4) Assistant Public Information Officer:**

| Sl. No. | Designation | Address | Phone (O) | Phone (R) | Fax | E-Mail |
|---|---|---|---|---|---|---|
| 1. | Asst. Executive Engineer. | No.1 Bhadra Canal Sub-Division, Davangere. | Nil | Nil | Nill | - |
| 2. | Asst. Executive Engineer. | No.2 Bhadra Canal Sub-Division, Davangere. | Nil | Nil | Nil | - |
| 3. | Asst. Executive Engineer. | No.3 Bhadra Canal Sub-Division, Thyavanige Davangere-District. | 958180-276302 | Nil | Nil | - |
| 4. | Asst. Executive Engineer. | No.4 Harihar Bhadra Canal Sub-Division, Davangere-Disrict. | 958192-240014 | Nil | - | - |

Executive Engineer,
No.5 Bhadra Canal Division,
Davangere.

PR-1476

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ-3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029

ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ/ ಸಿಆರ್-102/ 2006, ದಿನಾಂಕ:28ನೇ ಸೆಪ್ಟೆಂಬರ್, 2006

ಅರ್ಜಿದಾರರು

ಶ್ರೀಮತಿ ಭಾಗ್ಯಮ್ಮ ಕೋಂ ಲೇಟ್ ವೆಂಕಟರವಣಪ್ಪ ಮತ್ತು ಇತರರು. ನೆಲಮಾಚನಹಳ್ಳಿ, ಚಿಂತಾಮಣಿ ತಾಲ್ಲೂಕು, ಹಾಲಿ.ನಂ.721, ಪೊಲೀಸ್ ಮಾದಪ್ಪ ಕಾಂಪೌಂಡ್ ಹತ್ತಿರ, ಹೆಬ್ಬಾಳ, ಬೆಂಗಳೂರು-24.

ಪ್ರತಿವಾದಿಗಳು

(1) ಶ್ರೀರಾಮರೆಡ್ಡಿ ಬಿನ್ ದೊಡ್ಡಸುಬ್ಬಾರೆಡ್ಡಿ, ನೇರಲಮರದಹಳ್ಳಿ, ಸದಲಿ ಅಂಚೆ, ಶಿಡ್ಲಘಟ್ಟ ತಾಲ್ಲೂಕು, ಕೋಲಾರ ಜಿಲ್ಲೆ.

(2) ದಿ ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ.ಲಿ. ಬ್ರಾಂಚ್ ಆಫೀಸ್, ನಂ.1092/ 2 ನ್ಯೂ ಎಕ್ಸ್‌ಟೆನ್ಷನ್ ಡೂಂಲೈಟ್ ಸರ್ಕಲ್, ಕೋಲಾರ.

ಶ್ರೀಮತಿ ಭಾಗ್ಯಮ್ಮ ಹಾಗೂ ಇತರರು ಮೃತ ವೆಂಕಟರವಣಪ್ಪನ ಹೆಂಡತಿ ಹಾಗೂ ವಾರಸುದಾರರೆಂದು ಹೇಳಿ ಪರಿಹಾರ ಪಡೆಯುವ ಸಲುವಾಗಿ ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ಅನ್ವಯ ಈ ಕಛೇರಿಯಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎಸ್.ಎಸ್. ಷರೀಫ್
ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ವಿಭಾಗ-3, ಬೆಂಗಳೂರು.

ಪಿ.ಆರ್.1477

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಡಿವಿಜಿ: ಸಿಆರ್-87/ 2006, ದಿನಾಂಕ:25ನೇ ಸೆಪ್ಟೆಂಬರ್, 2006

ಅರ್ಜಿದಾರರು

ಶಾಮಲಾಲ್ ಯಾದವ್ ಬಿನ್ ರಾಮ್‌ಸಿಂಗ್ ಯಾದವ್ ಮತ್ತಿಬ್ಬರು.

ವಾಸ: ಕೇರ್ ಆಫ್ ರಾಮ್‌ದಯಾಳ್ ಶಂಕರ್ ಮಿಲ್ ಹಿಂಭಾಗ, ದಾವಣಗೆರೆ.

ಪ್ರತಿವಾದಿಗಳು

(1) ಪವನ್ ಶರ್ಮಾ ಬಿನ್ ಜಗನ್ನಾಥ್ ಶರ್ಮ, ಗೂಡ್ಸ್ ವೈಯಕಲ್ ಮಾಲೀಕರು, ನಂ.ಜಿ.ಜೆ.15/ ಎಕ್ಸ್ 8676.

ವಾಸ: ಪ್ಲಾಟ್ ನಂ.397, ಎನ್.ಆರ್. ಪದ್ಮಪ್ಲಾಸ್ಟಿಕ್ ಸಿಲ್ ವಾಸ್ ರೋಡ್, ಜಿ.ಐ.ಡಿ.ಸಿ. ವಿ.ಐ.ಪಿ.ಐ. ತಾಲ್ಲೂಕು, ಪರದಿ ವಾಲ್‌ಸಾದ್ ಜಿಲ್ಲೆ, ಗುಜರಾತ್ ರಾಜ್ಯ.

(2) ದಿ ಡಿವಿಜನಲ್ ಮ್ಯಾನೇಜರ್ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಕೇಶವಪುರ, ಹುಬ್ಬಳ್ಳಿ.

ಪ್ರಕರಣೆ

ಶ್ರೀ ಶಾಮಲಾಲ್ ಯಾದವ್ ಮತ್ತಿಬರು ಇವರು ಮೃತ ಅವದೀಶ್ ಕುಮಾರ್ ಯಾದವ್ ಇವರ ತಂದೆ ಮತ್ತು ತಾಯಿ ಹಾಗೂ ತಮ್ಮ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅವದೀಶ್ ಕುಮಾರ್ ರವರು ಒಂದನೇ ಪ್ರತಿವಾದಿಗಳಾದ ಪವನ್ ಶರ್ಮಾ ಇವರ ಗೂಡ್ಸ್‌ವೆಯಿಕಲ್ ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಲ್ಯಾಣರಾವ್ ಬಿ. ಗೌಡೆ
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1478

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಡಿವಿಜಿ: ಸಿಆರ್-88/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) ಪರಸಪ್ಪ ಬಿನ್ ರಾಮಪ್ಪ, ಮತ್ತಿತರ 3 ಜನರು.<br>ಎಲ್ಲಾರವಾಸ: ಎಲೆಬೇತೂರು ಪೋಸ್ಟ್ ಗ್ರಾಮ, ದಾವಣಗೆರೆ ತಾಲ್ಲೂಕು. | (1) ಹೆಚ್. ಗುರುಸಿದ್ದಪ್ಪ ಬಿನ್ ನಾರಪ್ಪ, ಟ್ರಾಕ್ಟರ್ ಮಾಲೀಕರು, ನಂ.ಸಿ.ಎನ್.ಯು.9730 ಮತ್ತು ಟ್ರೆಲರ್ ನಂ.ಕೆಎ-17/ಬಿಎ-3488.<br>ವಾಸ: ಎಲೆಬೇತೂರು ಪೋಸ್ಟ್, ದಾವಣಗೆರೆ ತಾಲ್ಲೂಕು.<br>(2) ದಿ ಡಿವಿಜನಲ್ ಮ್ಯಾನೇಜರ್ ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ನರಸರಾಜ ರೋಡ್, ದಾವಣಗೆರೆ. |

ಪ್ರಕರಣೆ

ಶ್ರೀ ಪರಸಪ್ಪ, ಮತ್ತಿತರರು ಇವರು ಮೃತಳಾದ ವಿಜಯಮ್ಮ @ ಜಯಮ್ಮ ಇವರ ಗಂಡ ಮತ್ತು ಮಕ್ಕಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತಳಾದ ವಿಜಯಮ್ಮ @ ಜಯಮ್ಮ ರವರು ಒಂದನೇ ಪ್ರತಿವಾದಿಗಳಾದ ಹೆಚ್.ಗುರುಸಿದ್ದಪ್ಪ ಇವರ ಟ್ರಾಕ್ಟರ್ ನಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಲ್ಯಾಣರಾವ್ ಬಿ. ಗೌಡೆ
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1479

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ: ಕಾನಪ: ಡಿವಿಜಿ: ಸಿಆರ್-89/ 2006, ದಿನಾಂಕ:28ನೇ ಸೆಪ್ಟೆಂಬರ್, 2006**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) Harijinder Singh @ Harvinder Singh.<br>2) Gurumithkaur W/o Harijinder Singh.<br>3) Davinder Singh, S/o Harijinder Singh.<br>4) Sukvinder Singh.<br>R/o. Dhand-Village. Taran Tq:<br>Amrithsar District, Punjab State. | (1) Narindar Kaur Sandu, Bhakthavar Singh, Lorry Owner.<br>R/o. 209, 40 teljee white castle Building, Nasika Phata, Kasarwadi. Pune, Maharastra State.<br>(2) New Indian Assurance Co., Ltd.,<br>Davangere. |

ಪ್ರಕರಣೆ

ಶ್ರೀ (1) ಹರಿಜೀಂದರ್ ಸಿಂಗ್ (2) ಗುರುಮಿತ್ ಕೌರ್ (3) ದೇವಿಂದರ್ ಸಿಂಗ್ (4) ಸುಕ್‌ವಿಂದರ್ ಸಿಂಗ್ ಇವರ ತಾಯಿ ಮತ್ತು ತಂದೆ, ತಮ್ಮಂದಿರು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪವನ್‌ದೀಪ್ ಸಿಂಗ್ ರವರು ಒಂದನೇ ಪ್ರತಿವಾದಿಗಳಾದ ನರೇಂದರ್ ಕೌರ್ ಸಂಧು, ಇವರ ಲಾರಿಯಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಲ್ಯಾಣರಾವ್ ಬಿ. ಗೌಡೆ
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1480

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು, ಇವರ ನಡವಳಿಕೆಗಳು

ವಿಷಯ: ಡಾ: ಡಿ. ದೇವೇಂದ್ರನ್ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರ ಸ್ಥಿರಾಸ್ಥಿಯನ್ನು ಶ್ರೀಮತಿ ಬಿ.ಆರ್. ಪಂಕಜ W/o ಡಿ.ಎಸ್. ಶಿವರಾಮಯ್ಯ ದೇವರಾಯಪಟ್ಟಣ ತುಮಕೂರು, ಇವರ ಹೆಸರಿಗೆ ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

ಉಲ್ಲೇಖ: 1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರ ಪತ್ರ ಸಂಖ್ಯೆ: ಮಾ.ಅ. 101/ 2006-07 ದಿನಾಂಕ: 07.08.2006.

2) ಕಾರ್ಯದರ್ಶಿ/ ವ್ಯವಸ್ಥಾಪಕರು ಶ್ರೀ ಕನಕ ಪತ್ತಿನ ಸಹಕಾರ ಸಂಘ ನಿ., ತುಮಕೂರು ದಿನಾಂಕ:04.05.2006.

3) ಈ ಕಛೇರಿಯ ಪತ್ರ ಸಂಖ್ಯೆ: 10/ 2006-07 ದಿನಾಂಕ:31.08.2006.

ಪ್ರಸ್ತಾವನೆ:

ಡಾ: ಡಿ. ದೇವೇಂದ್ರನ್ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರು ಶ್ರೀ ಕನಕ ಪತ್ತಿನ ಸಹಕಾರ ಸಂಘ/ ಬ್ಯಾಂಕ್ ನಿ., ತುಮಕೂರು ಇಲ್ಲಿ ಸಾಲ ಪಡೆದು ಅಸಲು, ಬಡ್ಡಿ ಮತ್ತು ಇತರೇ ಖರ್ಚು ಒಟ್ಟು ರೂ.2,53,485/- ಗಳಿಗೆ ಸುಸ್ತಿಯಾಗಿದ್ದು, ವಸೂಲಾತಿಗಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿದ್ದು. ಈ ದಾವಾ ಸಂಖ್ಯೆ ಎ.ಆರ್.ಟಿ. 24/ 04-05 ದಿನಾಂಕ:14.06.2004 ಅವಾರ್ಡ್ ಆಗಿರುತ್ತದೆ. ಈ ನಿರ್ಣಯದ ಜಾರಿಗಾಗಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರೀತ್ಯಾ ಅಮಲ್ಜಾರಿಯನ್ನು ದಿನಾಂಕ:04.08.2004 ಪಡೆಯಲಾಗಿದೆ. ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಹಣವನ್ನು ಸಂಘ/ ಬ್ಯಾಂಕಿಗೆ ಮರುಪಾವತಿಸಿದೆ ಸುಸ್ತಿದಾರರಾದ ಕಾರಣದಿಂದ ಡಿಕ್ರಿ ಹಣವನ್ನು ವಸೂಲಿಮಾಡಲು ಅಮಲ್ಜಾರಿ ಸಂಖ್ಯೆ: 223/ 04-05 ದಿನಾಂಕ:04.08.2004ರಂದು ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು. ಮಾರಾಟಾಧಿಕಾರಿಗಳು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ:21.07.2006ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿದ್ದು ಹರಾಜಿನ ದಿನಾಂಕಕ್ಕೆ ಸಂಘಕ್ಕೆ/ ಬ್ಯಾಂಕಿಗೆ ಸುಸ್ತಿ ಸಾಲಗಾರರಿಂದ ಒಟ್ಟು ರೂ. 2,91,709/- ಗಳು ಸಂಘಕ್ಕೆ/ ಬ್ಯಾಂಕಿಗೆ ಮರುಪಾವತಿಸಲು ಬಾಕಿ ಇರುತ್ತದೆ. ಕರ್ನಾಟಕ ಸಹಕಾರ ಸಂಘಗಳ 1960 ನಿಯಮ 38ರ ರೀತ್ಯಾ ದಿನಾಂಕ:21.07.2006 ಬಹಿರಂಗ ಹರಾಜು ನಡೆಸಿ ಸದರಿ ಹರಾಜಿನಲ್ಲಿ ಶ್ರೀಮತಿ ಬಿ.ಆರ್. ಪಂಗಜ W/o ಡಿ.ಎಸ್. ಶಿವರಾಮಯ್ಯ ದೇವರಾಯಪಟ್ಟಣ ತುಮಕೂರು, ಇವರು ಭಾಗವಹಿಸಿ ಅತಿ ಹೆಚ್ಚಿನ ಬಿಡ್ಡುದಾರರಾಗಿ ರೂ.2,70,000/- ಗಳ ಅತ್ಯಧಿಕ ಬಿಡ್ಡು ಕೂಗಿರುವುದರಿಂದ ಸುಸ್ತಿ ಸಾಲಗಾರರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(6) (ಎ) ರನ್ವಯ ಶ್ರೀಮತಿ ಬಿ.ಆರ್. ಪಂಗಜ W/o ಡಿ.ಎಸ್. ಶಿವರಾಮಯ್ಯ, ದೇವರಾಯಪಟ್ಟಣ ತುಮಕೂರು ಇವರಿಗೆ ಸದರಿ ಹರಾಜನ್ನು ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡಲು ಉಲ್ಲೇಖ (1) ಮತ್ತು (2)ರಲ್ಲಿ ನಮೂದಿಸಿದ ಪತ್ರದಲ್ಲಿ ಕೋರಿರುತ್ತಾರೆ. ಬಹಿರಂಗ ಹರಾಜಿನ ಮಾರಾಟದ ದಿನಾಂಕದಿಂದ 30 ದಿವಸಗಳಲ್ಲಿ ಸ್ಥಿರಾಸ್ತಿಯ ಮಾರಾಟಕ್ಕೆ ಮೊದಲು ಅದರ ಒಡೆತನ ಹೊಂದಿರುವಂತ ಅಥವಾ ಮಾರಾಟಕ್ಕೆ ಮುನ್ನ ಪಡೆದ ಸ್ವಾಮ್ಯವನ್ನು ಹೊಂದಿದ ಕಾರಣದಿಂದ ಹಕ್ಕನ್ನು ಪಡೆದವರು ಮತ್ತು ಈ ಕಛೇರಿಗೆ ನಿಯಮಾನುಸಾರ ಠೇವಣಿ ಇಟ್ಟು ಮಾರಾಟವನ್ನು ರದ್ದುಪಡಿಸಬೇಕೆಂದು ನಿಯಮ 38 (ಎ) (4)ರ ರೀತಿಯಾಗಿ ಅಥವಾ ಡಿಕ್ರಿದಾರರು ಅಥವಾ ಮಾರಾಟದಿಂದ ತನ್ನ ಹಕ್ಕಿಗೆ ಬಾಧೆಯಾದ ಯಾವುದೇ ವ್ಯಕ್ತಿಯು, ಬಹಿರಂಗ ಹರಾಜು ನಡೆಸುವಲ್ಲಿ ತಪ್ಪು ನಡೆದಿದೆ ಎಂದು 38ನೇ ನಿಯಮ 5(ಎ) ಅಡಿ ಮಾರಾಟ ರದ್ದುಪಡಿಸಬೇಕೆಂದು 30 ದಿವಸಗಳೊಳಗಾಗಿ ಯಾವುದೇ ಅರ್ಜಿ ಈ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಈ ಆದೇಶ ಹೊರಡಿಸಲಾಗಿದೆ.

### ಆದೇಶ

ಕ್ರಮ ಸಂಖ್ಯೆ: ಎ.ಆರ್.ಟಿ/ ಎ.ಬಿ.ಎಸ್./ ಸಿ.ಆರ್.-08/ 06-07, ದಿನಾಂಕ:4ನೇ ಸೆಪ್ಟೆಂಬರ್, 2006

ಶ್ರೀ ಮುರುಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38 (6) (ಎ) ರನ್ವಯ ಹಾಗೂ ಕರ್ನಾಟಕ ಸಹಕಾರ ಸಂಘಗಳ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ. 69. ಸಿ.ಎಲ್.ಎಂ/ 2001 ದಿನಾಂಕ:21.11.2001 ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಡಾ: ಡಿ. ದೇವೇಂದ್ರನ್ S/o ಎಸ್. ದೊಡ್ಡಣ್ಣ ಒಡೆಯರ್, ಮುನ್ಸಿಪಲ್ ಲೇಔಟ್ ತುಮಕೂರು ಇವರ ಸ್ಥಿರಾಸ್ತಿಯ ಷೆಡ್ಯೂಲ್‌ನಲ್ಲಿ ವಿವರಿಸಲಾದ ನಿವೇಶನ ಇರುವ ಸ್ಥಿರಾಸ್ತಿಯನ್ನು ಶ್ರೀಮತಿ ಬಿ.ಆರ್. ಪಂಗಜ W/o ಡಿ.ಎಸ್. ಶಿವರಾಮಯ್ಯ, ದೇವರಾಯಪಟ್ಟಣ ತುಮಕೂರು, ಇವರ ಹೆಸರಿಗೆ ನಿಲ್ಲಿಸಿ ಬಹಿರಂಗ ಹರಾಜು ಮಾರಾಟ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಮತ್ತು ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38(7) ರೀತ್ಯಾ, ಮಾರಾಟ ಮಾಡಲಾದ ಆಸ್ತಿಯ ಮತ್ತು ಖರೀದಿದಾರನ ಹೆಸರನ್ನೊಳಗೊಂಡ ಆಸ್ತಿಯ ಮಾರಾಟದ ಬಗ್ಗೆ ನಿರ್ಣಾಯಿತ ಸಾಕ್ಷಿಯಾಗಿ ನೀಡಿದ ಪ್ರಮಾಣ ಪತ್ರವನ್ನು ಲಗತ್ತಿಸಿ ಆದೇಶಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಹಸ್ತಾಕ್ಷರದೊಂದಿಗೆ ದಿನಾಂಕ:04.09.2006ರಂದು ಈ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

### ಸ್ಥಿರ -ಸ್ವತ್ತಿನ ಷೆಡ್ಯೂಲ್

ತುಮಕೂರು ನಗರ, ದೇವರಾಯಪಟ್ಟಣ, ಬಡಾವಣೆ, ಮು.ಖಾ.ನಂ.1018/ 1019 (ಮೊದಲಿಗೆ ದೇವರಾಯ ಪಟ್ಟಣ ಗ್ರಾಮದ ಸರ್ವೆ ನಂ. 75/1ಎ ರಲ್ಲಿದ್ದ ಸೈಟ್ ನಂ.1 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ: ಉತ್ತರದಕಡೆ 40 ಅಡಿಗಳು, ದಕ್ಷಿಣದ ಕಡೆ 46 ಅಡಿಗಳು ಉತ್ತರ-ದಕ್ಷಿಣ: ಪೂರ್ವದ ಕಡೆ 53 ಅಡಿ, ದಕ್ಷಿಣದ ಕಡೆ 31 ಅಡಿಗಳು ಆಗಿದ್ದು ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಬೇರೆಯವರ ಜಮೀನು, ಪಶ್ಚಿಮಕ್ಕೆ 30 ಅಡಿ ರಸ್ತೆ, ಉತ್ತರಕ್ಕೆ: ಸೈಟ್ ನಂ.2, ದಕ್ಷಿಣಕ್ಕೆ: ಕೆರೆ ಅಂಗಳ ಈ ಮಧ್ಯೆ ಇರುವ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

## ಕರ್ನಾಟಕ ಸಹಕಾರ ಸಂಘಗಳ 1960 ನಿಯಮ 38(7) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರನ್ವಯ ಮಾರಾಟದ ಬಗ್ಗೆ ಪ್ರಮಾಣ ಪತ್ರ

### ಸ್ಥಿರಸ್ವತ್ತಿನ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿದ ಸ್ಥಿರೀಕರಣದ ಪ್ರಮಾಣ ಪತ್ರ

ಡಾ: ಡಿ. ದೇವೇಂದ್ರನ್ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು, ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರನ್ವಯ ಆದೇಶವನ್ನು ಕಲಂ 101 ರೀತ್ಯಾ ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರಸ್ವತ್ತುಗಳನ್ನು ದಿನಾಂಕ:04.09.2006ರಂದು ಈ ಕಛೇರಿಯ ಆದೇಶದಡಿಯಲ್ಲಿ ಶ್ರೀಮತಿ ಬಿ.ಆರ್. ಪಂಕಜ W/o ಡಿ.ಎಸ್. ಶಿವರಾಮಯ್ಯ, ದೇವರಾಯಪಟ್ಟಣ, ತುಮಕೂರು, ಇವರ ಹೆಸರಿಗೆ ಹರಾಜನ್ನು ಖಾಯಂ ಮಾಡಿ ದೃಢೀಕರಣ ಆದೇಶ ನೀಡಿದೆ. ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಸ್ವಾಮ್ಯ, ಅಧಿಕಾರ, ನಾಮ, ಮತ್ತು ಬಾಧ್ಯತೆ ಶ್ರೀಮತಿ ಬಿ.ಆರ್. ಪಂಗಜ W/o ಡಿ.ಎಸ್. ಶಿವರಾಮಯ್ಯ, ದೇವರಾಯಪಟ್ಟಣ, ತುಮಕೂರು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಎಂದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರನ್ವಯ ಪ್ರಮಾಣ ಪತ್ರ ನೀಡಿದೆ.

ಡಾ: ಡಿ. ದೇವೇಂದ್ರನ್ S/o ಎಸ್. ದೊಡ್ಡಣ್ಣ ಒಡೆಯರ್ ಮುನ್ಸಿಪಲ್ ಲೇಔಟ್, ತುಮಕೂರು ಇವರ

ಸ್ವತ್ತಿನ ವಿವರ

ತುಮಕೂರು ನಗರ, ದೇವರಾಯಪಟ್ಟಣ, ಬಡಾವಣೆ, ಮು.ಖಾ.ನಂ.1018/ 1019 (ಮೊದಲಿಗೆ ದೇವರಾಯ ಪಟ್ಟಣ ಗ್ರಾಮದ ಸರ್ವೆ ನಂ.75/ 1ಎ ರಲ್ಲಿದ್ದ ಸೈಟ್ ನಂ.1 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ: ಉತ್ತರದಕಡೆ 40 ಅಡಿಗಳು, ದಕ್ಷಿಣದ ಕಡೆ 46 ಅಡಿಗಳು ಉತ್ತರ-ದಕ್ಷಿಣ: ಪೂರ್ವದ ಕಡೆ 53 ಅಡಿ, ದಕ್ಷಿಣದ ಕಡೆ 31 ಅಡಿಗಳು ಆಗಿದ್ದು ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಬೇರೆಯವರ ಜಮೀನು, ಪಶ್ಚಿಮಕ್ಕೆ: 30 ಅಡಿ ರಸ್ತೆ, ಉತ್ತರಕ್ಕೆ: ಸೈಟ್ ನಂ.2 ದಕ್ಷಿಣಕ್ಕೆ: ಕೆರೆ ಅಂಗಳ ಈ ಮಧ್ಯೆ ಇರುವ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾತಿ ಅಧಿಕಾರಿಗಳು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.1481

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

### ಸಂಖ್ಯೆ: ಕೆ.ಎಸ್.ಎ: ಸಿ.ಆರ್.:33/06-07, ದಿನಾಂಕ:18ನೇ ಅಕ್ಟೋಬರ್, 2006

ಎಜುಕೇಟ್, ಅಜಿಟೇಟ್ ಸಂಸ್ಥೆಯವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಪೀಣ್ಯ ಪ್ಲಾಂಟೇಷನ್ ಸ.ನಂ.2ರಲ್ಲಿ ಸುಮಾರು 20 ವರ್ಷಗಳಿಂದ ವಾಸವಾಗಿದ್ದು, ಅಲ್ಲಿನ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ:27.07.2006ರಂದು ಸರ್ಕಾರದಲ್ಲಿ ಸಭೆ ನಡೆಸಲಾಗಿದ್ದು, ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ ಪೀಣ್ಯ ಸ.ನಂ.2 ರಲ್ಲಿ ವಾಸವಾಗುತ್ತಿರುವ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡಲು ಸದರಿ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಣೆ ಮಾಡಲು ಕ್ರಮ ತೆಗೆದುಕೊಳ್ಳಬೇಕೆಂದು ಸೂಚನೆ ನೀಡಲಾಗಿರುತ್ತದೆ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಪೀಣ್ಯ ಗ್ರಾಮದ ಪರಿಮಿತಿಯಲ್ಲಿರುವ ಪೀಣ್ಯ ಪ್ಲಾಂಟೇಷನ್ ಸ.ನಂ.2ರಲ್ಲಿ 13.20 ಎಕರೆ: ಗುಂಟೆ ಪ್ರದೇಶದಲ್ಲಿ 1,077, ಕುಟುಂಬಗಳಿದ್ದು, 6,500 ಜನಸಂಖ್ಯೆಯಿಂದ ಕೂಡಿರುತ್ತದೆ. ಸದರಿ ಪ್ರದೇಶಕ್ಕೆ ನಗರಸಭೆಯಿಂದ ಮೂಲಭೂತ ಸೌಕರ್ಯಗಳನ್ನು ಒದಗಿಸಿದ್ದು, ಬೀದಿ ದೀಪ, ರಸ್ತೆ, ಬೋರ್‌ವೆಲ್, ಶೌಚಾಲಯ, ಕೊಳವೆಬಾವಿಗಳು, ಒಳಚರಂಡಿ ವ್ಯವಸ್ಥೆ ಒದಗಿಸಲಾಗಿರುತ್ತದೆ. ಇಲ್ಲಿಯ ನಿವಾಸಿಗಳು ಸುಮಾರು 20 ವರ್ಷಗಳಿಂದ ಅಲ್ಲಿಯೇ ವಾಸವಾಗಿದ್ದು, 1995ರ ವಿಧಾನಸಭೆಯ ಮತದಾರರ ಪಟ್ಟಿಯಲ್ಲಿ ಇವರ ಹೆಸರುಗಳು ಇದ್ದು, ಸದರಿಯವರಿಗೆ ಹಕ್ಕುಪತ್ರವನ್ನು ನೀಡಲು ಸದರಿ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಲು ಕೋರಿರುತ್ತಾರೆ. ಆಯುಕ್ತರವರ ವರದಿಯಂತೆ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರುರವರು 'ಕೊಳಚೆ ಪ್ರದೇಶ'ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಷೆಡ್ಯೂಲ್

ಬೆಂಗಳೂರು ಉತ್ತರ ತಾಲ್ಲೂಕು ಪರಿಮಿತಿಯಲ್ಲಿರುವ ಪೀಣ್ಯ ಪ್ಲಾಂಟೇಷನ್ ಸ.ನಂ.2ರ ಕೊಳಚೆ ಪ್ರದೇಶ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಪೀಣ್ಯ ಪ್ಲಾಂಟೇಷನ್ ಕೊಳಚೆ ಪ್ರದೇಶ | ಡಿಫೆನ್ಸ್ ಲ್ಯಾಂಡ್ | 2 | 13.20 ಎಕರೆ: ಗುಂಟೆ | ಏರ್‌ಫೋರ್ಸ್ ಪ್ರದೇಶ | ಖಾಲಿ ಪ್ರದೇಶ, ರಸ್ತೆ | ಖಾಲಿ ಪ್ರದೇಶ, ರಸ್ತೆ | ಹೆಚ್.ಎಂ.ಟಿ. ಕಾಂಪೌಂಡ್ |

ಎಂ.ಎ. ಸಾಧಿಕ್
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1529